॥ಶ್ರೀ ಜಗದ್ಗುರುಪಂಚಾಚಾರ್ಯಾಃ ಪ್ರಸೀದಂತು॥





# ವಸೂತ್ರಪಾಠಃ

ನ್ನಡಶಿವಸೂತ್ರಪುರಾವೃತ್ತಸಹಿತಃ

ಸಂಪಾದಕಃ

ಪಂಡಿತ ಕೈಲಾಸಲಿಂಗಶಿವಾಚಾರ್ಯಸ್ವಾಮಿ

ಹಿಮಾಲಯಸ್ಥಃ

ಶಿವಯೋಗಿರಾಜಃ ॥

೧೯೫೦

॥ಶ್ರೀ ಜಗದ್ಗುರುಪಂಚಾಚಾರ್ಯಾಃ ಪ್ರಸೀದಂತು॥



# ಶಿವಸೂತ್ರಸಾರಃ

## ಕನ್ನಡಶಿವಸೂತ್ರಪುರಾವೃತ್ತಸಹಿತಃ


ಸಂಪಾದಕಃ

ಪಂಡಿತ ಕೈಲಾಸಲಿಂಗಶಿವಾಚಾರ್ಯಸ್ವಾಮೀ

ಹಿಮಾಲಯಸ್ಥಃ

ಶಿವಯೋಗಿರಾಜಃ ॥



೧೯೫೦

ಅಕ್ಷಯತೃತೀಯಾಯಾಮ್ ।
ಶಾಕಾಬ್ದೇ ೧೮೭೨ ಶತತಮೋ ।
ಏಕೋರಾಮಾರಾಧ್ಯಜಯಂತೀಮಹೋತ್ಸವೇ ।
ಬೆಂಗಳೂರನಗರೇ ।
ಶಿವಸೂತ್ರಪ್ರಕಾಶಕಃ-
ಪಂಡಿತ ಕೈಲಾಸಲಿಂಗಶಿವಾಚಾರ್ಯೈಃ॥





ಪ್ರಕಾಶಕೇನ ಗ್ರಂಥಸ್ಯಾಸ್ಯ ಸರ್ವಾಧಿಕಾರಃ
ಸುರಕ್ಷಿತಃ

೧೦೦೦ ಗ್ರಂಥಾಮುದ್ರಿತಾಃ॥
— ಮುದ್ರಕಃ —
ಶ್ರೀ ಕೃಷ್ಣಾಮುದ್ರಣಾಲಯಃ । ಬೆಂಗಳೂರನಗರಸ್ಥಃ ।
[೧೯೫೦]



ಶ್ರೀ ಕೇದಾರನಾಥ ಮಹಾದೇವಾಲಯಃ
SRI KEDARANATHA TEMPLE



ಶ್ರೀ ದಾಕ್ಷಾರಾಮಕ್ಷೇತ್ರೇ ಶ್ರೀ ಭೀಮನಾಥ ಮಹಾಲಿಂಗಾದ್
ಏಕೋರಾಮಾರಾಧ್ಯ ಜಗದ್ಗುರೋರಾವಿರ್ಭಾವಃ

|| ಸಂಪಾದಯಿತುರ್ವಕ್ತವ್ಯಂ ||

ಅಸ್ತ್ಯುತ್ತರಸ್ಯಾಂದಿಶಿ ದೇವತಾತ್ಮಾ
ಹಿಮಾಲಯೋ ನಾಮ ನಗಾಧಿರಾಜಃ ।
ಪೂರ್ವಾಪರೌತೋಯನಿಧೀ ವಗಾಹ್ಯ
ಸ್ಥಿತಃ ಪೃಥಿವ್ಯಾ ಇವಮಾನದಂಡಃ ॥

ಶ್ರೀಕಾಲಿದಾಸ ವಚನೇನಾನೇನ ಹಿಮಾಲಯಸ್ಯ ದೇವತಾತ್ಮತಾ ಸರ್ವಶ್ರುತ್ಯೈವ। ತತ್ರಖಲು ಪರಮಪಾವನೀ ಗಂಗಾ ಪ್ರಾದುರ್ಭೂಯ ಸುರಾಸುರನರ ಕಿನ್ನರಾದೀನ್ ಪಾವಯಂತೀ ವಾರಾಣಸ್ಯಾಂವಿರಾಜತೇ। ತತಏವ ಹಿಮವತೋರಾಜ್ಞಃ ಜಾಯಮಾನಾ ಜಗದಂಬಿಕಾಭಗವತೀ ಪರಾಶಕ್ತಿರುಮಾ ಕುಮಾರೀ ಪಾರ್ವತೀನಾಮ್ನಾ ಪ್ರಸಿದ್ಧಾ ಜಗದೀಶ್ವರಂಶಂಕರಂ ಕೈಲಾಸಪತಿಂಪತಿತ್ವೇನ ಜಗ್ರಾಹ । ಸಾಪರಮೇಶ್ವರೀ – ಗೌರೀಕಾಲೀಮಹಿಷಮರ್ದಿನೀರೂಪೇಣ ವಿಖ್ಯಾತಾ ಬಭೂವ! ತಸ್ಮಿನ್ ಹಿಮಾಲಯೇ ಕೇದಾರಖಂಡೇ ಪುರಾಭಗವಾನ್ ಪರಮೇಶ್ವರಃ ಪಂಚ-ಕೃತ್ಯರಸಿಕೋ ಲಿಲಾಂಚಕ್ರೆ ।

ಪುರಾತನೋಯಥಾಹಂವೈತಥಾಸ್ಥಾನಮಿದಂಕಿಲ ।
ಯದಾಸೃಷ್ಟಿ ಕ್ರಿಯಾಯಾಂಚಮಯಾವೈ ಬ್ರಹ್ಮಮೂರ್ತಿನಾ ॥
ಸ್ಥಿತಮತ್ರೈವಸತತಂ ಪರಬ್ರಹ್ಮಜಿಗೀಷಯಾ ।
ತದಾದಿಕಮಿದಂ ಸ್ಥಾನಂ ದೇವಾನಾಮಪಿದುರ್ಲಭಮ್ ॥
( ಸ್ಕಾಂ ಕೇ . ಖಂ . )

ಇತ್ಯಾದಿಶಿವೋಕ್ತ್ಯಾ ಕೇದಾರಖಂಡಸ್ಯಾತೀವಪುರಾತನತ್ವಂಸ್ಥಾಪಿತಂ। ಅತ್ರೈವ ಭಗವಾನ್ ಜ್ಯೋತಿರ್ಲಿಂಗರೂಪೇಣಕೇದಾರೇಶ್ವರನಾಮ್ನಾ–

|| ಹಿಮಾಲಯೇತು ಕೇದಾರಮ್ ||

ಇತ್ಯಾರ್ಯೋಕ್ತ್ಯಾನಯೇನವಿಶ್ವೋದ್ಧಾರಕಃ ಸನ್' ಪರಮಶಿವೋಮಹಿಷ–

ರೂಪೇಣಾಪಿ ನೀಲರುದ್ರಾದಿಶ್ರುತಿಪ್ರಮಾಣತಃ ಪ್ರಕಟಿತೋಬಭೂವ। ಸಮಾಮ್ನಾಯತೇಚ ಶಿವಾಗಮೇಶಾಸ್ತ್ರೇ. ತತ್ರಕೇದಾರೇ ಪ್ರಮಥ ಸಾರ್ವಭೌಮಾಚಾರ್ಯವರ್ಯ ಏಕೋರಾಮಜಗದ್ಗುರುವರಃ ದಕ್ಷಿಣೇ ಗೋದಾವರ್ಯಾಸ್ತೀರೇ ದಾಕ್ಷಾರಾಮೇ ಭೀಮನಾಥಮಹಾಲಿಂಗಮುಖತ ಆವಿರ್ಭೂಯ ಕೇದಾರಸಿಂಹಾಸನಮಧಿತಸ್ಥೇ। ತತ್ಪಾರಂಪರ್ಯೇ ಜಗದ್ಗುರುಭೂಕುಂಡಪ್ರಭೃತಯೋಜಗದಾಚಾರ್ಯಾಃ ಪೀಠಮೇನ ದಲಂಚಕ್ರಿರೇ। ಕೇದಾರಪೀಠಾಧೀಶ್ವರಾಷ್ಟಗುರವೋ ಬಹವೋ ಬಭೂವುಃ। ಪುರಾತನಾಇಮೇಜಗದಾಚಾರ್ಯಾಃ ಪೀಠಮಿದ ಮಧಿ ಷ್ಠಾಯ ಮಹರ್ಷಿರಾಜರ್ಷಿ ಸಾರ್ವಭೌಮೈರ್ಮಹಾರಾಜಾಧಿರಾಜೈಃ ಸಂಪೂಜ್ಯಮಾನಾರೇಜಿರೇ। ಅದ್ಯಾಪಿಪೀಠೇಸ್ಮಿನ್ ರಾಜಾಧಿರಾಜಾರ್ಪಿತ ಗ್ರಾಮಾಃ ಶತಾದಧಿಕಾಃ ಸಂತಿ। ಶಿವಗಣಾಇಮೇ ವೀರಮಾಹೇಶ್ವರ ಚಕ್ರವರ್ತಿನೋ ಹಿಮಾಲಯೇಕೇದಾರಕ್ಷೇತ್ರೇऽದ್ಯಾಪಿ ವಿರಾಜಂತೇ। ಶ್ರೀ ೧೧೦೮ಜಗದ್ಗುರುನೀಲಕಂಠಲಿಂಗಶಿವಾಚಾರ್ಯಭಗವತ್ಪಾದ – ಹದ್ಯಾವಿರ್ಭೂತೋಹಂಶ್ರೀಮದೇಕೋರಾಮಪೀಠೇನಿವಸನ್ "ಅರಣ್ಯ ಗಿರಿಗುಹಾಪುಲಿನಾದಿಷು ಯೋಗಾಭ್ಯಾಸೋಪದೇಶಃ" ಇತಿಪ್ರೋಕ್ತ ಗೌತಮ ಸೂತ್ರಾನು ಸಾರೇಣ ಶ್ರೀಗುರೋರಾಜ್ಞಯಾ ಶ್ರೀ ಕೇದಾರ ನಾಥಮಧ್ಯಮಹೇಶ್ವರ ಸನ್ನಿಧೌ ಪರಮಶಿವಮುಪಾಸಯನ್ ಶಿವಧ್ಯಾ ನವಶಾತ್ ಶಿವಜ್ಞಾನಸಾಧಕಶಿವಶಾಸ್ತ್ರ ಮಾಲೋಡಯನ್ ಕದಾಚಿತ್ ಶ್ರೀಮಹೇಶ್ವರಾನುಗ್ರಹತಃ ಪ್ರಾಪ್ತಮೇನಂ ಶಿವಾದ್ವಯದರ್ಶನ ಶಾಸ್ತ್ರಂ ಪುರಾವೃತ್ತೇನ ಶಿವಪುರಾಣೋಕ್ತ ಸುಬ್ರಹ್ಮಣ್ಯ ವಾಮದೇವ ಸಂವಾದೇನ ವಿಶದೀಕುರ್ವನ್ "ಮಹಾಶಿವಸೂತ್ರಪಾಠಂ" ಸಾದರಂ ಸರ್ವೇಷಾಂ ವಿದುಷಾಂ ವಿದ್ಯಾರ್ಥಿನಾಂಕಲ್ಯಾಣಾಯ ಪ್ರಕಾಶ ಯಾಮಿ। ಕರ್ಣಾಟಕೇ ಸ್ವದೇಶೇ ಕರ್ಣಾಟಲಿಪ್ಯಾಮ್। ಇತಿಶಿವಂ

ಪಂಡಿತಕೈಲಾಸಲಿಂಗಶಿವಾಚಾರ್ಯಸ್ವಾಮೀ



ಶಿವಸೂತ್ರ ಪ್ರಕಾಶಕಃ
ಪಂಡಿತ ಕೈಲಾಸಲಿಂಗ ಶಿವಾಚಾರ್ಯಃ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



# ಶಿವಸೂತ್ರ ಪುರಾವೃತ್ತಂ.



ಶ್ರೀಮದ್ಭಗವತ್ಪರಮಶಿವನು ನಿಗಮಾಗಮಪ್ರವರ್ತಕನೆಂಬುದು ಸರ್ವ ಸಮ್ಮತವಾಗಿರುವದಷ್ಟೆ ? ಆ ನಿಗಮಾಗಮಗಳು ಸರ್ವಪ್ರಾಣಿಗಳ ಸನ್ಮಾರ್ಗ ದರ್ಶಕಗಳಾಗಿರುತ್ತವೆ. ತದ್ವತ್ "ಚೈತನ್ಯಮಾತ್ಮಾ" ಇತ್ಯಾದಿ ಶಿವಸೂತ್ರಗಳೂ ಸಹ ಪರಮೇಶ್ವರನ ಮುಖದಿಂದ ಪ್ರಕಾಶವಾಗಿರುತ್ತವೆ. ಈ ಶಿವಸೂತ್ರಗಳ ಮೇಲೆ ಶ್ರೀ ಸುಬ್ರಹ್ಮಣ್ಯ (ಷಡಾನನ) ಸ್ವಾಮಿಯು ವಾರ್ತಿಕವನ್ನು ವಿರಚಿಸಿ ವಿಸ್ತರಿಸಿದ ಸವಿಸ್ತೃತ ಪುರಾವೃತ್ತವು, ವೇದವ್ಯಾಸವಿರಚಿತ, ಶಿವಪುರಾಣದ ಕೈಲಾಸ ಸಂಹಿತೆಯ ಶಿವಾದ್ವೈತ ಪ್ರಕ್ರಿಯೆಯಲ್ಲಿ ವರ್ಣಿತವಾಗಿರುತ್ತದೆ. ಈ ಶಿವಸೂತ್ರಗಳು ಉಪನಿಷನ್ಮೀಮಾಂಸೆಯ ಸಿದ್ಧಾಂತವನ್ನು ಬೋಧಿಸುತ್ತವೆ. ಈ ವಿಷಯವು ಶಿವಪುರಾಣೋಕ್ತ ಸುಬ್ರಹ್ಮಣ್ಯ ವಾಮದೇವ ಸಂವಾದದಿಂದ ಸ್ಪಷ್ಟವಾಗುತ್ತದೆ.

ಏತದೇವ ಮುನೇ ಗುಹ್ಯಂ ಶಿವೇನ ಪರಿಭಾಷಿತಮ್ ।
ಅಂಬಾಯಾಃ ಶೃಣ್ವತಸ್ತಸ್ಯಾಃ ಸ್ತನ್ಯಂ ಪೀತ್ವಾ ಮುಹು-
ರ್ಮುಹುಃ ॥ ೯೮ ॥

ಮಯಾಪಿ ನಿಶ್ಚಿತಂ ತತ್ತೇ ವದಾಮಿ ಶೃಣು ಸಾಂಪ್ರತಮ್
ಕರ್ತ್ರಸ್ತಿತಾತ್ವಮಾರಭ್ಯ ಶಾಸ್ತ್ರವಾದಃ ಸುವಿಸ್ತರಃ ॥ ೯೯ ॥

(ಶಿ. ಪು. ಕೈ. ಸಂ. ಅಂ. ೧೧)

ಎಲೈ ವಾಮದೇವಮುನಿಯೇ! ನಾನು ಹೇಳುವವಿಷಯವನ್ನು ಕೇಳು. ನಾನು ಅಂಬೆಯು ಸ್ತನ್ಯಪಾನವನ್ನು ಮಾಡುತ್ತಿರುವಾಗ್ಗೆ ಪರಮೇಶ್ವರನು ಇದೇ ವಿಷಯವನ್ನು ಪುನಃಪುನಃ ಹೇಳುತ್ತಿರುವು ದನ್ನುಕೇಳುತ್ತಾ ನನಗೆ ನಿಶ್ಚಿತವಾದದ್ದನ್ನು ಈಗ ನಿನಗೆ ಹೇಳುತ್ತೇನೆ. "ದ್ಯಾವಾಭೂಮೀ ಜನಯನ್ ದೇವ ಏಕಃ । ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ" ಇತ್ಯಾದಿ ಶ್ರುತ್ಯನುಸಾರವಾಗಿ ಕರ್ತೃಸ್ತಿ ತಾತ್ವವನ್ನಾರಂಭಿಸಿ ಶಾಸ್ತ್ರವಾದವು ಸುವಿಸ್ತರವಾಗಿದೆ.

ಪ್ರಜ್ಞಾನಬ್ರಹ್ಮವಾಕ್ಯೇ ತು ಪ್ರಜ್ಞಾನಾರ್ಥಃ ಪ್ರದೃಶ್ಯತೇ ।
ಪ್ರಜ್ಞಾನಶಬ್ದಶ್ಚೈತನ್ಯಪರ್ಯಾಯಃಸ್ಯಾನ್ನ ಸಂಶಯಃ॥೨೪
ಚೈತನ್ಯಮಾತ್ಮೇತಿ ಮುನೇ ಶಿವಸೂತ್ರಂ ಪ್ರವರ್ತಿತಮ್ ।
ಚೈತನ್ಯಮಿತಿವಿಶ್ವಸ್ಯ ಸರ್ವಜ್ಞಾನಕ್ರಿಯಾತ್ಮಕಮ್ ॥ ೨೫ ॥
ಸ್ವಾತಂತ್ರ್ಯಂ ತತ್ಸ್ವಭಾವೋ ಯಃ ಸಆತ್ಮಾ ಪರಿಕೀರ್ತಿತಃ ।
ಇತ್ಯಾದಿ ಶಿವಸೂತ್ರಾಣಾಂ ವಾರ್ತಿಕಂ ಕಥಿತಂ ಮಯಾ॥೨೬

(ಶಿ-ಪು-ಕೈ-ಸಂ-ಅ-೧೦)

"ಪ್ರಜ್ಞಾನಂ ಬ್ರಹ್ಮ" ಈ ಮಹಾವಾಕ್ಯದಲ್ಲಿ ಪ್ರಜ್ಞಾನಾರ್ಥವು ಪ್ರದರ್ಶಿತವಾಗಿದೆ. ಪ್ರಜ್ಞಾನ ಶಬ್ದವು ಚೈತನ್ಯ ಪರ್ಯಾಯವಾಗಿದೆ.

" ಪ್ರಜ್ಞಾನ ಶಬ್ದಸ್ಯ ಪರ್ಯಾಯಶ್ಚಿಚ್ಛಬ್ದಃ ಸ್ತ್ರೀತ್ವಮಾಗತಃ "
(ಶಿ. ಪು. ಕೈ. ಅ. ೧೦)

ಈ ಪುರಾಣೋಕ್ತಿಯನ್ನನುಸರಿಸಿ ಪ್ರಜ್ಞಾನಶಬ್ದವು ಚಿಚ್ಛಕ್ತಿಯ ವಾಚಕವಾಗಿದೆ. ಇದೇ ಅರ್ಥದಲ್ಲಿ,

ವಿಶಾನೇವ ಪರಾಂ ಶಕ್ತಿಂ ಶ್ವೇತಾಶ್ವತರಶಾಖಿನಃ।
ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚೇತ್ಯಸ್ತುವನ್ ಮುದಾ ॥
(ಶಿ. ಪು ಕೈ. ಅ. ೧೬

ಈ ಪ್ರಮಾಣಾನುಸಾರವಾಗಿ ಪ್ರಜ್ಞಾನಪರ್ಯಾಯಕ ಚಿಚ್ಛಕ್ತಿಯು ಆತ್ಮನ ಸ್ವಾಭಾವಿಕ ಶಕ್ತಿಯೆಂದು ಶ್ವೇತಾಶ್ವತರ ಶಾಖಿಗಳು "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ " ಇತ್ಯಾದಿ ರೀತ್ಯಾ ಸ್ತುತಿಸಿದರೆಂದು ಸ್ಮರಿಸಲ್ಪಟ್ಟಿರುತ್ತದೆ. ಇಂತಹ ಅರ್ಥವನ್ನು ಗರ್ಭೀಕರಿಸಿಕೊಂಡು ಶ್ರೂಯಮಾಣವಾದ ಪ್ರಜ್ಞಾನ ಶಬ್ದವು ಚೈತನ್ಯ ಪರ್ಯಾಯವಾಗಿರುವ ಬಗ್ಗೆ ಸಂಶಯ ವಿರುವುದಿಲ್ಲ.

ಎಲೈ ಮುನಿಯೇ! ಈ ಮಹಾವಾಕ್ಯಾರ್ಥವನ್ನು ಪ್ರಮಾಣವಾಗಿರಿಸಿಕೊಂಡು "ಚೈತನ್ಯಮಾತ್ಮಾ" ಈ ಶಿವಸೂತ್ರವು ಶಂಕರನಿಂದ ಪ್ರವರ್ತಿತವಾಗಿದೆ. ವಿಶ್ವದ ಸರ್ವ ಜ್ಞಾನಕ್ರಿಯಾತ್ಮಕವಾದ ಚೈತನ್ಯಾತ್ಮಕ ಸ್ವಾತಂತ್ರ್ಯ ಸ್ವಭಾವವುಳ್ಳವನು ಆತ್ಮನೆಂದು ಸಂಕೀರ್ತಿತನಾಗಿರುತ್ತಾನೆ. ಇತ್ಯಾದಿ ಯಾಗಿ ಶಿವಸೂತ್ರಗಳವಾರ್ತಿಕವು ನನ್ನಿಂದ ಹೇಳಲ್ಪಟ್ಟಿತು.

" ಚೈತನ್ಯಂ ಚಿಲ್ಲಿಂಗಂ" (ತ್ರಿಪುರಾ ತಾಪಿನೀ. ಉ.) ಇತ್ಯಾದಿ ಶ್ರುತಿಗಳ ಪ್ರಮಾಣಾನುಸಾರವಾಗಿ

"ಪ್ರಜ್ಞಾನಂ ಬ್ರಹ್ಮ' ಚೈತನ್ಯಮಾತ್ಮಾ" ಈ ಶ್ರುತಿ ಸೂತ್ರಗಳಲ್ಲಿರುವ ಬ್ರಹ್ಮ, ಆತ್ಮ ಶಬ್ದಗಳಿಗೆ ಲಿಂಗವೆಂದು ಅರ್ಥವಾಗುತ್ತದೆ. ಆದ್ದರಿಂದ ಬ್ರಹ್ಮ-ಲಿಂಗ-ತತ್ತ್ವ ಜಿಜ್ಞಾಸುಗಳಾದ ಶಿವಯೋಗಿಗಳು ಈ ಶಿವಸೂತ್ರಗಳಿಂದ ಪರಮಶಿವ ಸಾಮ್ಯವನ್ನು ಪಡೆಯುತ್ತಾರೆ. ಈ ಬಗ್ಗೆ " ಶಿವತುಲ್ಯೋ ಜಾಯತೇ " " ಮುಕ್ತಃ ಶಿವಸಮೋ ಭವೇತ್ " ಇತ್ಯಾದಿ ಶ್ರುತಿಸ್ಮೃತಿಗಳು ಪ್ರಮಾಣಗಳಾಗಿವೆ. ಆದದುರಿಂದಲೇ ಪ್ರಜ್ಞಾನಂ ಬ್ರಹ್ಮ, ಚೈತನ್ಯಮಾತ್ಮಾ ಈ ಶ್ರುತಿ ಸೂತ್ರಗಳಲ್ಲಿರುವ ಪ್ರಜ್ಞಾನಶಬ್ದವು ಚೈತನ್ಯಪರ್ಯಾಯಕವೂ, ಬ್ರಹ್ಮ ಶಬ್ದವು ಆತ್ಮಪರ್ಯಾಯಕವೂ ಎಂಬುವುದರಲ್ಲಿ ಸಂದೇಹವಿರುವುದೇ ಇಲ್ಲ. ಈ ಬಗ್ಗೆ ಬ್ರಹ್ಮಸೂತ್ರಗಳ ವ್ಯಾಖ್ಯಾತೃಗಳಾದ ಸ್ವಪ್ರಭಾನಂದ ಶಿವಾಚಾರ್ಯರು ಶಿವಾದ್ವೈತ ಮಂಜರಿಯಲ್ಲಿ ಹೇಳಿರುವುವೇನೆಂದರೆ :—

ಏವಂ ಸ್ಥಿತೇ ಬ್ರಹ್ಮಣಸ್ತಾವದ್ ದೃಕ್ಕ್ರಿಯಾ ಸ್ವಭಾವತ್ವೇನ ಚೇತನತ್ವಾತ್ "ಅತ ಶ್ಚೈತನ್ಯಮಾತ್ಮೇತಿ" ಶಿವೇನಾಪಿ ಸೂತ್ರಿತತ್ವಾತ್ ಬ್ರಹ್ಮ-ಶಿವ ಸೂತ್ರಯೋರೇಕಾರ್ಥವಿಶ್ರಾಂತತ್ವೇನ ವಿರೋಧಾಭಾವಾತ್ ಶಾಸ್ತ್ರೈಕ್ಯಂ ವಿಮರ್ಶನೀಯಮ್

ಬ್ರಹ್ಮವು ಜ್ಞಾನಕ್ರಿಯಾಸ್ವಭಾವಾತ್ಮಕ ಚೇತನವಾಗಿರುವುದರಿಂದಲೇ ಪರಮಶಿವನಿಂದಲೂ ಸಹ ಇದೇ ಅರ್ಥದಲ್ಲಿಯೇ "ಚೈತನ್ಯಮಾತ್ಮಾ" ಇಂತೆಂದು ಸೂತ್ರಿತವಾಗಿರುವುದರಿಂದಲೂ ಬ್ರಹ್ಮಸೂತ್ರಗಳಿಗೂ ಶಿವಸೂತ್ರಗಳಿಗೂ ಏಕಾರ್ಥವಿಶ್ರಾಂತಿ ಮೂಲಕವಾಗಿ ವಿರೋಧವಿಲ್ಲದುದರಿಂದ. ಶಾಸ್ತ್ರೈಕ್ಯವು ಹೇಳಲ್ಪಡುತ್ತದೆ.

ಏತಾವತಾ-ಬ್ರಹ್ಮ-ಲಿಂಗ-ಆತ್ಮ ಈ ಶಬ್ದಗಳು ಪರಮಾತ್ಮ ಪರಮಶಿವಪ್ರಕಾಶ ವಾಚಕಗಳಾಗಿರುವುದರಿಂದ ಈ ಶಿವಸೂತ್ರ ಪ್ರಮಾಣವಾದ ಆತ್ಮ ತತ್ತ್ವವನ್ನು ತಿಳಿದು ಆತ್ಮಸಾಕ್ಷಾತ್ಕಾರವನ್ನು ಪಡೆದು ವಿದ್ಯಾರ್ಥಿಗಳು ಧನ್ಯರಾಗತಕ್ಕದ್ದು.

ಜ್ಞಾನಂ ಬಂಧ ಇತೀದಂ ತು ದ್ವಿತೀಯಂ ಸೂತ್ರಮೀರಿತಂ।
ಜ್ಞಾನಮಿತ್ಯಾತ್ಮನಸ್ತಸ್ಯ ಕಿಂಚಿಜ್ಜ್ಞಾನಕ್ರಿಯಾತ್ಮಕಮ್ ॥೨೭
ಇತ್ಯಾಹಾದ್ಯಪದೇನೇಶಃ ಪಶುವರ್ಗಸ್ಯ ಲಕ್ಷಣಮ್ ।
(ಶಿ. ಪು ಕೈ. ಸಂ.)

'ಜ್ಞಾನಂ ಬಂಧಃ' ಇದು ದ್ವಿತೀಯ ಶಿವಸೂತ್ರವು. ಇಲ್ಲಿ 'ಜ್ಞಾನಂ' ಎಂಬ ಆದ್ಯ ಪದದಿಂದ ಪಶುವರ್ಗದಲಕ್ಷಣವಾದ ಕಿಂಚಿದ್ ಜ್ಞಾನಕ್ರಿಯಾತ್ಮಕಾರ್ಥವನ್ನು ಈಶ್ವರನು ಹೇಳುತ್ತಾನೆ. ಇಂತಹ ಜ್ಞಾನವೇ ಬಂಧವೆನಿಸುತ್ತದೆ.

ಪರಮಶಿವನು "ಅಹಂ ಬಹುಸ್ಯಾಮ್" ಸ ಏಕಾಕೀ ನ, ರಮತೇ, ಸ ದ್ವಿತೀಯಮೈಚ್ಛತ್, ಸ ಏತಾವಾನಾಸ, ತತ್ಸೃಷ್ಟ್ವಾ ತದೇವಾನು ಪ್ರಾವಿಶತ್, ತದನು ಪ್ರವಿಶ್ಯ ಸಚ್ಚ ತ್ಯಚ್ಚಾಭವತ್, ಇತ್ಯಾದಿ ಶ್ರುತ್ಯನುಸಾರವಾಗಿ ಸ್ವೇಚ್ಛೆಯಿಂದ ಜಗಜ್ಜಾಲವನ್ನು ನಿರ್ಮಿಸಲು ಉದ್ಯುಕ್ತನಾಗಿ ಭೂಮ್ಯಾದಿ ಶಿವತತ್ತ್ವ ಪರ್ಯಂತವಾದ ೩೬ ತತ್ತ್ವಗಳನ್ನು ವಿರಚಿಸಿ ಅವೆಲ್ಲವುಗಳನ್ನು ಪ್ರವೇಶ ಮಾಡುತ್ತ ಆಯಾ ಸ್ವರೂಪಧಾರಣೆ ಮಾಡಿ " ಲೋಕವತ್ತು ಲೀಲಾ ಕೈವಲ್ಯಂ " ಈ ಬ್ರಹ್ಮ ಸೂತ್ರಾಭಿಪ್ರಾಯ ನಯದಿಂದ ಲೀಲಾ ಲೋಲನಾಗಿ ಕ್ರೀಡಿಸುತ್ತಾನೆ.

ಪರಮಶಿವ ಮಹೇಶ್ವರನ ನಿಜೇಚ್ಛೆಯಿಂದ ಸೃಷ್ಟ್ಯುನ್ಮುಖವಾದ ಪ್ರಥಮಸ್ಪಂದವೇ ಶಿವತತ್ತ್ವವೆನಿಸುತ್ತದೆ. ಪರಮಶಿವ ಮಹೇಶ್ವರನ ಇಚ್ಛೆಯೇ ಸರ್ವಕೃತ್ಯಕಾರಿಣಿಯಾದ ಶಕ್ತಿತತ್ತ್ವವೆನಿಸುತ್ತದೆ. ಜ್ಞಾನ-ಕ್ರಿಯಾಶಕ್ತಿಯುಗ್ಮದಲ್ಲಿ ಜ್ಞಾನಾಂಶಾಧಿಕ್ಯದಿಂದ ಸದಾಶಿವತತ್ತ್ವವೆನಿಸುತ್ತದೆ. ಕ್ರಿಯಾಶಕ್ತಿಯ ಉದ್ರೇಕದಿಂದ ಈಶ್ವರ ತತ್ತ್ವವೆನಿಸುತ್ತದೆ. ಜ್ಞಾನಕ್ರಿಯಾ ಶಕ್ತಿಸಾಮ್ಯದಿಂದ ಶುದ್ಧವಿದ್ಯಾತತ್ತ್ವವೆನಿಸುತ್ತದೆ.

ಸ್ವಾಂಗರೂಪ ಭಾವಗಳಲ್ಲಿ ಪರಸ್ಪರ ತತ್ತ್ವಗಳಭಿನ್ನಬುದ್ಧಿಯೇ ಮಾಯಾತತ್ತ್ವವೆನಿಸುತ್ತದೆ. ಶಿವನು ಮಾಯಾಶಕ್ತಿಯಿಂದ ನಿಗ್ರಹೀತಶಕ್ತಿಕನಾಗಿ ನಿಖಿಲ ಪದಾರ್ಥಗ್ರಾಹಕ ಪುರುಷ ತತ್ತ್ವವೆಂದು ಹೇಳಿಸಿಕೊಳ್ಳುತ್ತಾನೆ. ಈ ವಿಷಯವು ಶಿವಾದ್ವೈತ ಮಂಜರಿಯಲ್ಲಿ ಸ್ಪಷ್ಟವಾಗಿದೆ— " ಸ್ವಾಂತರ್ಲೀನ ಚರಾಚರ ಪರಮೇಶ್ವರನಿಂದ ಕಾಷ್ಠಯೋಗದಿಂದ ವಹ್ನಿಯುದೆಸೆಯಿಂದ ವಿಸ್ಫುಲಿಂಗಾವಿರ್ಭಾವದಂತೆ ತದಿಚ್ಛಾಶಕ್ತಿವಶಾದ್ವಿಭಕ್ತವಾಗಿ ಪೂರ್ವೋಕ್ತ ಲಕ್ಷಣ- ಲಕ್ಷಿತ - ಮಾಯಾಶಕ್ತಿಯಲ್ಲಿ ಪ್ರತಿಬಿಂಬಗತಿಯಿಂದ ಪ್ರವಿಷ್ಟವಾದ ಯಾವ ಪ್ರಕಾಶವೋ ಅದೇ ಪುರುಷತತ್ತ್ವವೆನಿಸುತ್ತದೆ. ಈ ಪುರುಷನಿಗೆ ಮಾಯಾಕ್ರಾಂತತ್ವದ ದೆಸೆಯಿಂದ ಸ್ವತಂತ್ರ ಪ್ರಕಾಶಮಹೇಶ್ವರನಿಂದ ವಿಚ್ಛಿನ್ನತ್ವವಿದ್ದದರಿಂದ 'ನಾನು ಈಶ್ವರನಲ್ಲ, ಇಂತೆಂದು ಆತ್ಮನಲ್ಲಿ ಅನಾತ್ಮತಾಜ್ಞಪ್ತಿಯುಂಟಾಗುತ್ತದೆ. ಅದರಂತೆಯೇ ಅನಾತ್ಮ ದೇಹಾದಿಯಲ್ಲಿ ಆತ್ಮತಾಜ್ಞಪ್ತಿಯುಂಟಾಗುತ್ತದೆ. ಇವೆರಡು ಆಣವಮಲವು ಆದುದರಿಂದಲೇ ಶುಭಾಶುಭ ವಾಸನಾರೂಷಿತ ಕರ್ಮಮಲವುಂಟಾಗುತ್ತದೆ. ಅದರಂತೆ ಅನ್ಯೋನ್ಯಾಭಾವಭೇದಲಕ್ಷಣ

ಮಾಯಿಕಮಲವು ಪ್ರಾಪ್ತವಾಗುತ್ತದೆ. ಇಂಥ ಮಲ ತ್ರಯಶೃಂಖಲಿತನಾಗುವುದರಿಂದಲೇ ಸಂಸಾರಿಯೆಂದು ಹೇಳಿಸಿ ಕೊಳ್ಳಲ್ಪಡುತ್ತಾನೆ. " ಇಂತಹ ಮೋಹವು ಪಶುವಾದ ಜೀವನಿಗೆ ಸಂಭವಿಸುತ್ತದೆ. ಪ್ರಭುವಾದ ಪರಮಶಿವನಿಗೆ ಸಂಭವಿ ಸುವುದಿಲ್ಲ. ಇಂತಹ ಮೋಹಬದ್ಧನಾದ ಜೀವನು ಸದ್ಗುರೂಪದೇಶ ಬಲದಿಂದ ಪ್ರತ್ಯಭಿಜ್ಞಾತ ಪರಮೈಶ್ವರ್ಯವಂತನಾಗಿ ಚಿದ್ಘನಶಿವ ಸ್ವರೂಪನಾಗುತ್ತಾನೆ.

ಪರಮೇಶ್ವರನ ಸರ್ವಜ್ಞತ್ವ, ಸರ್ವಕರ್ತೃತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವಗಳೆಂಬ ಶಕ್ತಿಗಳು ಮಾಯಾಕ್ರಾಂತತ್ವದಶೆಯಲ್ಲಿ ಅವಿದ್ಯಾ-ಕಲಾ-ರಾಗ-ಕಾಲ-ನಿಯತಿ-ನಾಮಕ ಪಂಚಕಂಚುಕಾಭಿಧ ತತ್ತ್ವಗಳೆನಿಸುತ್ತವೆ.

ಈರೀತಿಯಾಗಿ ಸ್ವಮಾಯೆಯಿಂದ ತಾನು ಸಂಕುಚಿತರೂಪ ವುಳ್ಳವನೋ ಏನೋ ಎಂಬಂತೆ ಇದ್ದುಕೊಂಡು ಪಂಚಕಂಚುಕ ಯುಕ್ತನಾಗಿ ಭೋಕ್ತೃವಾಗಿ ಪುರುಷನೆಂದೆನಿಸಿಕೊಳ್ಳುತ್ತಾನೆಂದು ತಾತ್ಪರ್ಯವು.

ಗುಣತ್ರಯ ಸಾಮ್ಯಾವಸ್ಥೆಯೇ ಪ್ರಕೃತಿತತ್ತ್ವವೆನಿಸುತ್ತದೆ. ಬಳಿಕ ಅಹಂಕಾರ, ಬುದ್ಧಿ, ಮನಸ್ಸುಗಳೆಂಬ ತತ್ತ್ವಗಳು ಅಂತಃಕರಣ ತ್ರಯವೆನಿಸುತ್ತವೆ. ಶ್ರೋತ್ರ, ತ್ವಕ್, ಚಕ್ಷುಸ್, ಜಿಹ್ವಾ, ಘ್ರಾಣ ಗಳೆಂಬ ಪಂಚ ತತ್ತ್ವಗಳು ಜ್ಞಾನೇಂದ್ರಿಯಗಳೆನಿಸುತ್ತವೆ. ಶಬ್ದ ಸ್ಪರ್ಶ, ರೂಪ, ರಸ, ಗಂಧಗಳೆಂಬ ತದಿಂದ್ರಿಯ ವಿಷಯಗಳು ಪಂಚತನ್ಮಾತ್ರಗಳೆನಿಸುತ್ತವೆ. ವಾಕ್, ಪಾಣಿ, ಪಾದ, ಪಾಯು,

ಉಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳು ಮತ್ತು ಆಕಾಶ, ವಾಯು ವಹ್ನಿ, ಸಲಿಲ, ಭೂಮಿಗಳೆಂಬ ಪಂಚ ಮಹಾಭೂತಗಳು ಆಗಿರುತ್ತವೆ.

ಇಂತಹ ಷಟ್ತ್ರಿಂಶತ್ತತ್ತ್ವ ಸಂದೋಹವನ್ನು ವ್ಯಾಪಿಸಿ ಆತ್ಮನು ಕ್ರೀಡಿಸುತ್ತಾನೆ. ಈ ಜೀವನು ಓಂಶಿವೋಹಂ ಈ ಮಹಾ ಮಂತ್ರಾನುಸಂಧಾನದಿಂದ ಪ್ರತ್ಯಭಿಜ್ಞಾತ ಸದ್ಘನ ಚಿದ್ಘನ ಮುದ್ಘನ ಪರಮ ಶಿವನಾಗುತ್ತಾನೆ.

ವೀರಶೈವ ಸಿದ್ಧಾಂತದಲ್ಲಿರುವ ಷಟ್‌ಸ್ಥಲಗಳಲ್ಲಿ ಷಡ್‌ವಿಧ ಭಕ್ತಿಗಳಿಗೆ ಷಡಂಗಗಳಾದ ಸರ್ವಜ್ಞತ್ವಾದಿ ಶಕ್ತಿಗಳ ವಿಕಾಸವೇ ಮುಕ್ತಿಯೆಂದು ಜ್ಞಾಯಮಾನವಾಗಿರುತ್ತದೆ.

**ಚೈತನ್ಯಮಿತಿ ಭಾವಾಂತಃಶಬ್ದಃ ಸ್ವಾತಂತ್ರ್ಯಮಾತ್ಮಕಮ್**
**ಅನಾಕ್ಷಿಪ್ತವಿಶೇಷಂ ಸದಾಹ ಸೂತ್ರೇ ಪುರಾತನೇ ॥ ೨೮॥**

(ತಂತ್ರಾಲೋಕ-ಆ ೩)

ಅಭಿನವಗುಪ್ತ ಶಿವಾಚಾರ್ಯನು ಭಾವಪ್ರತ್ಯಯಯುತ ಚೈತನ್ಯ ಶಬ್ದಕ್ಕೆ ಸ್ವಾತಂತ್ರ್ಯವೆಂದು ಹೇಳುತ್ತಾನೆ. ಮತ್ತು ಪುರಾತನ ಶಿವ ಸೂತ್ರದಲ್ಲಿ ಚೈತನ್ಯಾತ್ಮತತ್ತ್ವದ ನಿರೂಪಣೆಯಿರುವುದರಿಂದ ಅನಾಕ್ಷಿಪ್ತವಾದವಿಶೇಷಗಳು ಪರಾಸ್ತಗಳಾಗಿರುತ್ತವೆ.

**ದ್ವಿತೀಯೇನ ತು ಸೂತ್ರೇಣ ಕ್ರಿಯಾಂ ವಾ ಕರಣಂ ಚ ವಾ**
**ಬ್ರುವತಾ ತಸ್ಯ ಚಿನ್ಮಾತ್ರರೂಪಸ್ಯ ದ್ವೈತಮುಚ್ಯತೇ ॥೨೯॥**
**ದ್ವೈತಪ್ರಥಾ ತದಜ್ಞಾನಂ ತುಚ್ಛತ್ವಾದ್ಬಂಧ ಉಚ್ಯತೇ ।**
**ತತ ಏವ ಸಮುಚ್ಛೇದ್ಯ ಇತ್ಯಾಽಽವೃತ್ತ್ಯಾ ನಿರೂಪಿತಮ್ ॥೩೦॥**

[ತಂತ್ರಾಲೋಕ-ಆ-೩]

ದ್ವಿತೀಯಸೂತ್ರದಿಂದ ಆತ್ಮನ ದ್ವೈತಜ್ಞಾನವು ಕಥಿತವಾಗಿದೆ. ಇಂಥ ಜ್ಞಾನವು ತುಚ್ಛವಾಗಿರುವುದರಿಂದ ಬಂಧವೆಂದು ಹೇಳಲ್ಪಟ್ಟಿದೆ. ಆದುದರಿಂದಲೇ ಈ ಬಂಧವು ಉಚ್ಛೇದನಾರ್ಹವಾಗಿದೆ. ಆದುದರಿಂದ ಚೈತನ್ಯಮಾತ್ಮಾ ಽ ಜ್ಞಾನಂ ಬಂಧಃ ಈರೀತಿ ಅಕಾರ ಪ್ರಶ್ಲೇಷದಿಂದ ಅರ್ಥವು ನಿರೂಪಿತವಾಗಿದೆ.

ಈ ಶಿವಸೂತ್ರಗಳ ಮೇಲೆ ಭಾಸ್ಕರಭಟ್ಟನು ವಾರ್ತಿಕವನ್ನು ವಿರಚಿಸಿರುತ್ತಾನೆ.

ಚೈತನ್ಯಮಾತ್ಮನೋ ರೂಪಂ ಸಿದ್ಧಂ ಜ್ಞಾನಕ್ರಿಯಾತ್ಮಕಮ್।
ತಸ್ಯಾನಾವೃತರೂಪತ್ವಾಚ್ಛಿವತ್ವಂ ಕೇನ ವಾರ್ಯತೇ ॥

ಜ್ಞಾನಕ್ರಿಯಾತ್ಮಕವಾದ ಚೈತನ್ಯವು ಆತ್ಮನ ಸ್ವರೂಪವಾಗಿರುತ್ತದೆ. ಆ ಆತ್ಮನ ಇಂಥ ಶಿವತ್ವವು ಸರ್ವದಾ ಪ್ರಕಾಶವಾಗಿರುವುದರಿಂದ ಯಾರಿಂದಲೂ ನಿವಾರಿಸಲು ಅಶಕ್ಯವಾಗಿದೆ. ಮತ್ತು

ತತ್ರಾತ್ಮನ್ಯೇವ ಶಿವತಾ ಸರ್ವಸ್ಯಾಖಂಡಿತೈವ ಹಿ ।
ಆ ಆತ್ಮನಲ್ಲಿಯೇ ಶಿವತ್ವವು ಅಖಂಡಿತವಾಗಿರುತ್ತದೆ.
ಸ್ವಸ್ವರೂಪಂ ಶಿವಃ ಸಾಕ್ಷಾತ್ ॥

ಸ್ವಸ್ವರೂಪವು ಸಾಕ್ಷಾತ್ ಶಿವತತ್ತ್ವವಾಗಿದೆ. ಇತ್ಯಾದಿ ಪ್ರಥಮ ಸೂತ್ರಾರ್ಥವು ವಾರ್ತಿಕದಲ್ಲಿ ನಿರೂಪಿತವಾಗಿದೆ.
ಈ ಗ್ರಂಥವು ಕಾಶ್ಮೀರ ರಾಜಧಾನಿಯಲ್ಲಿ ಮುದ್ರಿತವಾಗಿರುತ್ತದೆ.

ಈ ಮೊದಲನೆಯ ಸೂತ್ರದ ವಾರ್ತಿಕವು ಸ್ವಪ್ರಭಾನಂದ ಶಿವಾಚಾರ್ಯನಿಂದ ಶಿವಾದ್ವೈತ ಮಂಜರಿಯಲ್ಲಿ ಈನೋರಿಗೆ ನಿರೂಪಿತವಾಗಿದೆ.

ಚೈತನ್ಯಂ ದೃಕ್ಕ್ರಿಯಾರೂಪಂ ಶಿವಸ್ಯಪರಮಸ್ಯ ಯತ್ ।
ಸ್ವಾತಂತ್ರ್ಯಮೇತದೇವಾತ್ಮಾ ತಜ್ಞೋಽಸೌ ಪರಮಃ ಶಿವಃ॥

ಪರಮಶಿವನ ದೃಕ್ಕ್ರಿಯಾರೂಪಚೈತನ್ಯವೇ ಸ್ವಾತಂತ್ರ್ಯವು. ಅದೇ ಆತ್ಮ ತತ್ತ್ವವಾಗಿದೆ. ಆದುದರಿಂದಲೇ ಆತ್ಮನು ಪರಮಶಿವನಾಗಿದ್ದಾನೆ. ಈರೀತಿಯಾದ ವಾರ್ತಿಕವು ಕನ್ನಡ, ದೇವನಾಗರಿ ಲಿಪಿಯಲ್ಲಿ ಮೈಸೂರು, ಸೊಲ್ಲಾಪುರ ನಗರಗಳಲ್ಲಿ ಮುದ್ರಿತವಾದ ಶಿವಾದ್ವೈತ ಮಂಜರಿಯಲ್ಲಿ ಅದೆ. ಈವಾರ್ತಿಕವು ಶಿವಪುರಾಣೋಕ್ತ ಸುಬ್ರಹ್ಮಣ್ಯವಾರ್ತಿಕವನ್ನು ಅನುಸರಿಸುತ್ತದೆ. ಆದುದರಿಂದ ಸುಬ್ರಹ್ಮಣ್ಯ ಪ್ರೋಕ್ತವಾರ್ತಿಕವು ಶಿವಪುರಾಣದ ಕೈಲಾಸಸಂಹಿತೆಯಲ್ಲಿ ಬಂದಿರುವುದರಿಂದ ಆ ವಾರ್ತಿಕವನ್ನು ಅನುಸರಿಸಿಯೇ ಇತರ ವ್ಯಾಖ್ಯೆಗಳು ಆಗಿರಬೇಕಾಗಿ ಊಹಿಸಲೂ ಅವಕಾಶವಿದೆ. ಅರ್ಥಾತ್ ಶ್ರೀ ಶಿವಸೂತ್ರಗಳೂ ಶಿವಸೂತ್ರವೃತ್ತಿಯೂ ಬಹುಪುರಾತನ ಕಾಲದಿಂದ ಬಂದಂತೆ ತೋರುತ್ತವೆ. ಅಸ್ತು ?

ಈ ಶಿವಸೂತ್ರಗಳ ವಾರ್ತಿಕಕಾರನಾದ ಭಾಸ್ಕರಭಟ್ಟನು ಶಿವಸೂತ್ರಗಳ ಪುರಾವೃತ್ತವನ್ನು ಈ ಶ್ಲೋಕದಲ್ಲಿ ಉಲ್ಲೇಖಿಸಿರುತ್ತಾನೆ.—

ಶ್ರೀಮನ್ಮಹಾದೇವಗಿರೌ ವಸುಗುಪ್ತಗುರೋಃ ಪುರಾ।
ಸಿದ್ಧಾದೇಶಾತ್ಪ್ರಾದುರಾಸನ್ ಶಿವಸೂತ್ರಾಣಿ ತಸ್ಯ ಹಿ॥

ಪೂರ್ವದಲ್ಲಿ ಈ ಶಿವಸೂತ್ರಗಳು ಶ್ರೀ ಮಹಾದೇವಗಿರಿಯಲ್ಲಿ ಶಿವಾದೇಶದಿಂದ ಸುಪ್ರಸಿದ್ಧ ವಸುಗುಪ್ತ ಶಿವಾಚಾರ್ಯನಿಗೆ ಪ್ರಕಟವಾದವು. ಇದೇ ರೀತಿಯಾದ ಪುರಾವೃತ್ತವು ಕಲ್ಲಟ ಶಿವಾಚಾರ್ಯನಿಂದ ಸ್ಪಂದ ಕಾರಿಕೆಯ ವೃತ್ತಿಯ ಅಂತ್ಯದಲ್ಲಿ ಬರೆಯಲ್ಪಟ್ಟದೆ.



ಶ್ರೀ ಮಹಾದೇವಗಿರೌ ಮಹತೀಶಿಲಾ । ಶಂಕರೋಪಲಃ (ಶಂಕರಪಲ್) ಯತ್ರ ಶಿವಸೂತ್ರಾಣಿ ಪ್ರಕಟಿತಾನಿ ।

ದೃಬ್ಧ್ವಂ ಮಹಾದೇವಗಿರೌ ಮಹೇಶ
ಸ್ವಪ್ನೋಪದಿಷ್ಟಾಚ್ಛಿವಸೂತ್ರಸಿಂಧೋಃ ।
ಸ್ಪಂದಾಮೃತಂ ಯದ್ವಸುಗುಪ್ತಪಾದೈಃ
ಶ್ರೀಕಲ್ಲಟಸ್ತತ್ಪ್ರಕಟೀ ಚಕಾರ ॥ (ಸ್ಪಂದವೃತ್ತಿ)

ವಸುಗುಪ್ತ ಭಗವತ್ಪಾದರು ಮಹಾದೇವಗಿರಿಯಲ್ಲಿ ಮಹೇಶ್ವರನಿಂದ ಸ್ವಪ್ನದಲ್ಲಿ ಉಪದೇಶಿಸಲ್ಪಟ್ಟ ಶಿವಸೂತ್ರಸಮುದ್ರದಿಂದ ಸ್ಪಂದನಾತ್ಮಕ ಅಮೃತವನ್ನು ಪಡೆದರು. ಅರ್ಥಾತ್ ಶಿವಸೂತ್ರಗಳ ಸಾರಾಂಶವನ್ನು ಗರ್ಭೀಕರಿಸಿಕೊಂಡಿರುವ ಸ್ಪಂದಕಾರಿಕೆಯೆಂಬ ಶಿವಾದ್ವಯ ದರ್ಶನವನ್ನು ವಿರಚಿಸಿದರು. ಕಲ್ಲಟ ಶಿವಾಚಾರ್ಯರು ಸ್ಪಂದಕಾರಿಕೆಗಳಿಗೆ ವೃತ್ತಿಯನ್ನು ಬರೆದು ಪ್ರಕಟಮಾಡಿದರು.

ಕ್ಷೇಮರಾಜನೆಂಬಪಂಡಿತನು ಈ ಶಿವಸೂತ್ರಗಳ ಮೇಲೆ "ಶಿವಸೂತ್ರವಿಮರ್ಶಿನೀ" . ಎಂಬ ವೃತ್ತಿಯನ್ನು ವಿರಚಿಸಿರುತ್ತಾನೆ. ಅದರಲ್ಲಿಯೂ ಈ ವೃತ್ತವು ನಿರ್ದಿಷ್ಟವಾಗಿದೆ.

"ಶ್ರೀಮನ್ಮಹಾದೇವಗಿರೌ ಮಹಾಮಹೇಶ್ವರಃ ಶ್ರೀಮಾನ್ ವಸುಗುಪ್ತನಾಮಾ ಗುರುರಭವತ್. ಕದಾಚಿಚ್ಚಾಸೌ ದ್ವೈತದರ್ಶನಾಧಿವಾಸಿತಪ್ರಾಯೇ ಜೀವಲೋಕೇ ರಹಸ್ಯ ಸಂಪ್ರದಾಯೋ ಮಾವಿಚ್ಛೇದೀತ್ಯಾಶಯತೋಽನುಜಿಘೃಕ್ಷಾಪರೇಣ ಪರಮಶಿವೇನ ಸ್ವಪ್ನೇ ಅನುಗೃಹ್ಯೋನ್ಮಿಷಿತ ಪ್ರತಿಭಃಕೃತೋ ಯಥಾ—

"ಅತ್ರ ಮಹೀಭೃತಿ ಮಹತಿ ಶಿಲಾತಲೇ ರಹಸ್ಯಮಸ್ತಿ"
ತದಧಿಗಮ್ಯ ಅನುಗ್ರಹ ಯೋಗ್ಯೇಷು ಪ್ರಕಾಶಯ"

ಇತಿ,

ಪ್ರಬುದ್ಧ ಶ್ಚಾಸಾವನ್ನಿಷ್ಯನ್ ತಾಂ ಮಹತೀಂ ಶಿಲಾಂ ಕರಸ್ಪರ್ಶ ನಮಾತ್ರ ಪರಿವರ್ತನತಃ ಸಂವಾದೀಕೃತಸ್ವಪ್ನಾಂ ಪ್ರತ್ಯಕ್ಷೀಕೃತ್ಯೇ ಮಾನಿ ಶಿವೋಪನಿಷತ್ಸಂಗ್ರಹರೂಪಾಣಿ ಶಿವಸೂತ್ರಾಣಿ ತತಃ ಸಮಾಸಸಾದ"

ಶ್ರೀಮನ್ಮಹಾದೇವಗಿರಿಯಲ್ಲಿ ಮಹಾಮಾಹೇಶ್ವರಾಚಾರ್ಯನೂ ಸುಪ್ರಸಿದ್ಧನೂ ಆದ ಶ್ರೀ ವಸ್ತುಗುಪ್ತನಾಮಕ ಗುರುವು ಇದ್ದನು. ಬಳಿಕೊಂದುಕಾಲದಲ್ಲಿ ಮರ್ತ್ಯಲೋಕದಲ್ಲಿ ದ್ವೈತದರ್ಶನ ಪ್ರಚಾರವು ಹೆಚ್ಚಾಗಲಾಗಿ ಶಿವಾದ್ವೈತಸಿದ್ಧಾಂತ ರಹಸ್ಯ ಸಂಪ್ರದಾಯವು ವಿಚ್ಛಿನ್ನ ವಾಗಬಾರದು. ಈ ಅಭಿಪ್ರಾಯದಿಂದ ಅನುಗ್ರಹಮಾಡಲುದ್ಯುಕ್ತ ನಾದ ಪರಮಶಿವನು ವಸುಗುಪ್ತ ಶಿವಾಚಾರ್ಯನಿಗೆ ಸ್ವಪ್ನದಲ್ಲಿ ಅನು ಗ್ರಹಿಸಿದನು. ವಸುಗುಪ್ತಗುರುಗಳು ಸ್ವಪ್ನದಲ್ಲಿ ಅನುಗ್ರಹೀತರಾಗಿ ಉನ್ಮಿಷಿತಪ್ರತಿಭಾಶಕ್ತಿಯುತರಾದರು. ಅದು ಹೇಗೆಂದರೆ-

"ಈ ಮಹಾದೇವಗಿರಿಯೊಳಗೆ ಮಹಾಶಿಲಾತಲದಲ್ಲಿ ರಹಸ್ಯ ವಿದೆ. ಅದನ್ನು ಪಡೆದು ಅನುಗ್ರಹಯೋಗ್ಯರಲ್ಲಿ ಪ್ರಕಾಶಮಾಡು" ಹೀಗಾದ ಸ್ವಪ್ನದಿಂದ ಎಚ್ಚರಗೊಂಡು ವಸುಗುಪ್ತಾಚಾರ್ಯನು ಆ ಮಹಾಶಿಲೆಯಲ್ಲಿ ಹುಡುಕುವಂಥವನಾಗಿ ಕರಸ್ಪರ್ಶಮಾತ್ರ ಪರಿ ವರ್ತನದಿಂದ ಸಂವಾದೀಕೃತಸ್ವಪ್ನವುಳ್ಳಂಥ ಆ ಮಹಾಶಿಲೆಯನ್ನು ಪ್ರತ್ಯಕ್ಷಮಾಡಿ ಈ ಶಿವೋಪನಿಷತ್ಸಂಗ್ರಹರೂಪಗಳಾದ ಶಿವಸೂತ್ರ ಗಳನ್ನು ಆ ಮಹಾದೇವಗಿರಿಯ ಮಹಾಶಿಲೆಯ ತಲದಿಂದ ಪಡೆದನು.

ಮತ್ತು ಸ್ಪಂದನಿರ್ಣಯದ ಅಂತ್ಯದಲ್ಲಿ ಈ ಬಗ್ಗೆ ಬರೆದಿರುವ ಪದ್ಯವನ್ನು ಇಲ್ಲಿ ಉಲ್ಲೇಖಿಸಿ ಈ ರಹಸ್ಯದ ಮಹತ್ವವನ್ನು ತೋರಿಸಿ ವಿರಮಿಸುತ್ತೇವೆ.

ಲಬ್ಧ್ವಾಪ್ಯಲಭ್ಯಮೇತಜ್
ಜ್ಞಾನಧನಂ ಹೃದ್ಗುಹಾಂತಕೃತನಿಹಿತೇಃ ।
ವಸುಗುಪ್ತವಚ್ಛಿವಾಯ ಹಿ
ಭವತಿ ಸದಾ ಸರ್ವಲೋಕಸ್ಯ ॥೨॥ (ಸ್ಪಂದ.ನಿ. ೪)

ಈ ಜ್ಞಾನಧನವು ತನ್ನ ಹೃದ್ಗುಹೆಯ ಮಧ್ಯಸ್ಥನಿಧಿಯಿಂದಲೇ ಲಬ್ಧವಾದಾಗ್ಯೂ ಅಲಭ್ಯವಾಗಿದೆ. ಅಂತಹ ಜ್ಞಾನಧನವು ವಸುಗುಪ್ತಗುರುವಿನ ಹಾಗೆ ಸರ್ವಲೋಕಕ್ಕೂ ಸರ್ವದಾ ಕಲ್ಯಾಣಪ್ರದವಾಗಲಿ.

॥ ಇತಿ ಶಿವಸೂತ್ರಪುರಾವೃತ್ತಮ್ ॥



## ॥ ಅಥ ಶ್ರೀಶಿವಸೂತ್ರಪಾಠಃ ॥

೧. ಚೈತನ್ಯಮಾತ್ಮಾ ।
೨. ಜ್ಞಾನಂ ಬಂಧಃ ।
೩. ಯೋನಿವರ್ಗಃ ಕಲಾಶರೀರಮ್ ।
೪. ಜ್ಞಾನಾಧಿಷ್ಠಾನಂ ಮಾತೃಕಾ ।
೫. ಉದ್ಯಮೋ ಭೈರವಃ ।
೬. ಶಕ್ತಿಚಕ್ರ ಸಂಧಾನೇ ವಿಶ್ವಸಂಹಾರಃ ।
೭. ಜಾಗ್ರತ್ಸ್ವಪ್ನಸುಷುಪ್ತಭೇದೇ ತುರ್ಯಾಭೋಗಸಂಭವಃ ।
೮. ಜ್ಞಾನಂ ಜಾಗ್ರತ್ ।
೯. ಸ್ವಪ್ನೋ ವಿಕಲ್ಪಾಃ ।
೧೦. ಅವಿವೇಕೋ ಮಾಯಾಸೌಷುಪ್ತಮ್ ।
೧೧. ತ್ರಿತಯಭೋಕ್ತಾ ವೀರೇಶಃ ।

೧೨. ವಿಸ್ಮಯೋ ಯೋಗಭೂಮಿಕಾಃ ।
೧೩. ಇಚ್ಛಾಶಕ್ತಿರುಮಾಕುಮಾರೀ ।
೧೪. ದೃಶ್ಯಂ ಶರೀರಮ್ ।
೧೫. ಹೃದಯೇ ಚಿತ್ತಸಂಘಟ್ಟಾದ್ದೃಶ್ಯಸ್ವಾಪದರ್ಶನಮ್ ।
೧೬. ಶುದ್ಧತತ್ತ್ವಸಂಧಾನಾತ್ ।
೧೭. ಸ್ವಪದಶಕ್ತಿಃ ।
೧೮. ವಿತರ್ಕ ಆತ್ಮಜ್ಞಾನಮ್ ।
೧೯. ಲೋಕಾನಂದಃ ಸಮಾಧಿಸುಖಮ್ ।
೨೦. ಶಕ್ತಿಸಂಧಾನೇ ಶರೀರೋತ್ಪತ್ತಿಃ ।
೨೧. ಭೂತಸಂಧಾನ-ಭೂತಪೃಥಕ್ತ್ವವಿಶ್ವಸಂಘಟ್ಟಾಃ ।
೨೨. ಶುದ್ಧವಿದ್ಯೋದಯಾಚ್ಚಕ್ರೇಶತ್ವಸಿದ್ಧಿಃ ।
೨೩. ಮಹಾಹ್ರದಾನುಸಂಧಾನಾನ್ಮಂತ್ರವೀರ್ಯಾನುಭವಃ ।

ಇತಿ ಪ್ರಥಮೋನ್ಮೇಷೇ ಶಿವಸೂತ್ರಾಣಿ

೧. ಚಿತ್ತಂ ಮಂತ್ರಃ ।
೨. ಪ್ರಯತ್ನಃ ಸಾಧಕಃ ।
೩. ವಿದ್ಯಾಶರೀರಸತ್ತಾ ಮಂತ್ರರಹಸ್ಯಮ್ ।
೪. ಗರ್ಭೇ ಚಿತ್ತವಿಕಾಸೋ ವಿಶಿಷ್ಟವಿದ್ಯಾಸ್ವಪ್ನಃ ।
೫. ವಿದ್ಯಾಸಮುತ್ಥಾನೇ ಸ್ವಾಭಾವಿಕೇ ಖೇಚರೀ - ಶಿವಾವಸ್ಥಾ ।
೬. ಗುರುರುಪಾಯಃ ।
೭. ಮಾತೃಕಾ ಚಕ್ರ ಸಂಬೋಧಃ ।
೮. ಶರೀರಂ ಹವಿಃ ।
೯. ಜ್ಞಾನಮನ್ನಮ್ ।
೧೦. ವಿದ್ಯಾಸಂಹಾರೇ ತದುತ್ಥಸ್ವಪ್ನದರ್ಶನಮ್ ।

ಇತಿ ದ್ವಿತೀಯೋನ್ಮೇಷೇ ಶಿವಸೂತ್ರಾಣಿ

೧. ಆತ್ಮಾ ಚಿತ್ತಮ್ ।
೨. ಜ್ಞಾನಂ ಬಂಧಃ ।
೩. ಕಲಾದೀನಾಂ ತತ್ತ್ವಾನಾಮವಿವೇಕೋ ಮಾಯಾ ।
೪. ಶರೀರೇ ಸಂಹಾರಃ ಕಲಾನಾಮ್ ।
೫. ನಾಡೀಸಂಹಾರ ಭೂತಜಯ ಭೂತಕೈವಲ್ಯ ಭೂತ-
ಪೃಥಕ್ತ್ವಾನಿ ।
೬. ಮೋಹಾವರಣಾತ್ ಸಿದ್ಧಿಃ ।
೭. ಮೋಹಜಯಾದನಂತಾಭೋಗಾತ್ ಸಹಜ-
ವಿದ್ಯಾಜಯಃ ।
೮. ಜಾಗ್ರದ್ದ್ವಿತೀಯಕರಃ ।
೯. ನರ್ತಕ ಆತ್ಮಾ ।
೧೦. ರಂಗೋಽನ್ತರಾತ್ಮಾ ।
೧೧. ಪ್ರೇಕ್ಷಕಾಣೀಂದ್ರಿಯಾಣಿ ।
೧೨. ಧೀವಶಾತ್ ಸತ್ವಸಿದ್ಧಿಃ ।
೧೩. ಸಿದ್ಧಃ ಸ್ವತಂತ್ರಭಾವಃ ।
೧೪. ಯಥಾ ತತ್ರ ತಥಾಽನ್ಯತ್ರ ।
೧೫. ಬೀಜಾವಧಾನಮ್ ।
೧೬. ಆಸನಸ್ಥಃ ಸುಖಂ ಹ್ರದೇ ನಿಮಜ್ಜತಿ ।
೧೭. ಸ್ವಮಾತ್ರಾ ನಿರ್ಮಾಣಮಾಪಾದಯತಿ ।
೧೮. ವಿದ್ಯಾಽವಿನಾಶೇ ಜನ್ಮವಿನಾಶಃ ।
೧೯. ಕವರ್ಗಾದಿಷು ಮಾಹೇಶ್ವರ್ಯಾದ್ಯಾಃ ಪಶುಮಾತರಃ ।
೨೦. ತ್ರಿಷು ಚತುರ್ಥಂ ತೈಲವದಾಸೇಚ್ಯಮ್ ।
೨೧. ಮಗ್ನಃ ಸ್ವಚಿತ್ತೇನ ಪ್ರವಿಶೇತ್ ।
೨೨. ಪ್ರಾಣಸಮಾಚಾರೇ ಸಮದರ್ಶನಮ್ ।
೨೩. ಮಧ್ಯೇಽವರ ಪ್ರಸವಃ ।
೨೪. ಮಾತ್ರಾ ಸ್ವಪ್ರತ್ಯಯಸಂಧಾನೇ ನಷ್ಟಸ್ಯ-
ಪುನರುತ್ಥಾನಮ್ ।
೨೫. ಶಿವತುಲ್ಯೋ ಜಾಯತೇ ।

೨೬. ಶರೀರವೃತ್ತಿರ್ವ್ರತಮ್ ।

೨೭. ಕಥಾ ಜಪಃ ।

೨೮. ದಾನಮಾತ್ಮಜ್ಞಾನಮ್ ।

೨೯. ಯೋ ವಿಪಸ್ಥೋ ಜ್ಞಾಹೇತುಶ್ಚ ।

೩೦. ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಮ್ ।

೩೧. ಸ್ಥಿತಿ ಲಯೌ ।

೩೨. ತತ್ಪ್ರವೃತ್ತಾವಪ್ಯನಿರಾಸಃ ಸಂವೇತೃಭಾವಾತ್ ।

೩೩. ಸುಖದುಃಖಯೋರ್ಬಹಿರ್ಮನನಮ್ ।

೩೪. ತದ್ವಿಮುಕ್ತಸ್ತು ಕೇವಲೀ ।

೩೫. ಮೋಹಪ್ರತಿಸಂಹತಸ್ತು ಕರ್ಮಾತ್ಮಾ ।

೩೬. ಭೇದತಿರಸ್ಕಾರೇ ಸರ್ಗಾಂತರ ಕರ್ಮತ್ವಮ್ ।

೩೭. ಕರಣ ಶಕ್ತಿಃ ಸ್ವತೋಽನುಭವಾತ್ ।

೩೮. ತ್ರಿಪದಾದ್ಯನುಪ್ರಾಣನಮ್ ।

೩೯. ಚಿತ್ತಸ್ಥಿತಿವಚ್ಛರೀರಕರಣ ಬಾಹ್ಯೇಷು ।

೪೦. ಅಭಿಲಾಷಾದ್ಬಹಿರ್ಗತಿಃ ಸಂವಾಹ್ಯಸ್ಯ ।

೪೧. ತದಾರೂಢಪ್ರಮಿತೇ ಸ್ತತ್ಕ್ಷಯಾತ್ ಜೀವ-
ಸಂಕ್ಷಯಃ ।

೪೨. ಭೂತಕಂಚುಕೀ ತದಾ ವಿಮುಕ್ತೋ ಭೂಯಃ-
ಪತಿಸಮಃ ಪರಃ ।

೪೩. ನೈಸರ್ಗಿಕಃ ಪ್ರಾಣಸಂಬಂಧಃ ।

೪೪. ನಾಸಿಕಾಂತರ್ಮಧ್ಯಸಂಯಮಾತ್ ಕಿಮತ್ರ ಸವ್ಯಾಪ-
ಸವ್ಯಸೌಷುಮ್ನೇಷು ।

೪೫. ಭೂಯಃ ಸ್ಯಾತ್ ಪ್ರತಿಮೀಲನಮ್ ।

ಇತಿ ತೃತೀಯೋನ್ಮೇಷೇ ಶಿವಸೂತ್ರಾಣಿ

॥ ಇತಿ-ಶ್ರೀಶಿವಸೂತ್ರಪಾಠಃ ॥